ನಕ್ಕು ನಲಿಯುವ

ನತ್ತು

ದೀಪಾವಳಿ ಸಂಚಿಕೆ

ತುಷಾರ

ಡಿಸೆಂಬರ ೨೦೦೨

ಈ ಲೇಖನವನ್ನು
ಉದಯವಾಣಿ ದೀಪಾವಳಿ
ಸಂಚಿಕೆಂದು ಕಳುಹಲಾಗಿತ್ತು
ಸ್ವೀಕರಿಸಿದ ಬಗ್ಗೆ ಉತ್ತರವನ್ನು
ಬರೆದಿದ್ದರು ಆದರೆ
ಪ್ರಕಟವಾದದು ಮಾತ್ರ
ತುಷಾರ ಡಿಸೆಂಬರ ೨೦೦೨ರ
ಸಂಚಿಕೆಯಲ್ಲಿ

30-1-2003



'ಉದಯವಾಣಿ ದೀಪಾವಳಿ ವಿಶೇಷಾಂಕ'ಕ್ಕೆ ಆಹ್ವಾನಿತ

●ಎನ್. ಸಿ. ದೇಸಾಯಿ



# ನಕ್ಕು ನಲಿಯುವ ನತ್ತು







ಮೂಗಿನ ಶೋಭೆ ಮೂಗುತಿ ಅಥವಾ ನತ್ತು.
ಚಿನ್ನದ ನತ್ತು, ಮುತ್ತಿನ ನತ್ತು, ವಜ್ರದ ನತ್ತು
ಯಾವುದೇ ಆದರೂ
ಮೂಗು ಚುಚ್ಚಬೇಕಲ್ಲ?
ಆಧುನಿಕ ಹೆಣ್ಣಿಗೆ
ಮೂಗು ಚುಚ್ಚಿಯೇ ಗೊತ್ತಿಲ್ಲ!

N. C. DESAI
'BALAKRISHNA' 82 SILVER TOWN
Gokul Road

ಪರದೇಶದವರಿಗೆ ಭಾರತ ಅತೀ ಆಕರ್ಷಣೀಯ ದೇಶ, ಹೌದು ಇಲ್ಲಿಯ ಅವಶೇಷ , ಇತಿಹಾಸ ಎಷ್ಟು ಆಕರ್ಷಣೀಯವೋ ಅಷ್ಟೇ ಈ ನೆಲದ ಸಂಸ್ಕೃತಿಯೂ ಅವರನ್ನು ಎಳೆಯುತ್ತದೆ, ಕೈ ಮಾಡಿ ಕರೆಯುತ್ತದೆ, ದೇಶದುದ್ದಕ್ಕೂ ಭಾಷೆ , ವೇಷಭೂಷಣ, ವಸ್ತ್ರ ಒಡವೆ ಎಲ್ಲವೂ ವಿಭಿನ್ನ, ಪರದೇಶದವರನ್ನು ಬಿಡಿ, ನಾವೇ ನೂರಾರು ಮೈಲಿ ಪ್ರವಾಸ ಮಾಡಿದರೆ ಅಚ್ಚರಿಯಾಗುವಂತಹ ಬದಲಾವಣೆಯ ಅನುಭವ ನಮಗೇ ಆಗುತ್ತದೆ.

ಕೈಯಲ್ಲಿಯ ಕಡಗ, ತೋಳಲ್ಲಿಯ ವಂಕಿ, ಬೆರಳಲ್ಲಿಯ ಉಂಗುರ, ಕಿವಿಯಲ್ಲಿಯ ಓಲೆಗಳು, ಕೊರಳಲ್ಲಿಯ ಸರಗಳ ಬೆಡಗನ್ನಂತೂ ಹೇಳತೀರದು. ಇನ್ನು ಟೊಂಕದ ಪಟ್ಟಿ , ಕಾಲಗೆಜ್ಜೆ , ಕಾಲಗಡಗ ಇವುಗಳ ಬೆಡಗೂ ಅಷ್ಟೇ ವಿವಿಧ ಸರಪಳಿ, ಪೈಜಣ. ಹೀಗೆ ಹಿಂದಿನ ಬೆಡಗನ್ನು ನೆನೆಸುತ್ತಾ ಇಂದು ಪ್ರತಿ ಮಹಿಳೆಯೂ ಕಾಲಲ್ಲಿ ಚೈನನ್ನು ಧರಿಸಿಯೇ ಧರಿಸುತ್ತಾಳೆ. ಅದು







ಇಂದಿನ ಫ್ಯಾಶನ್ನಾಗಿ ಪರಿಣಮಿಸಿದೆ. ಪಂಜಾಬಿ ಸಲ್ವಾರ ಕಮೀಜ ದೇಶದ ಯುವತಿಯರ ಸಾಧಾರಣವಾದ (common )ತೊಡುಗೆಯಾಗಿದೆ, ದಕ್ಷಿಣ ಭಾರತ 'ಇಡ್ಲಿ' ದೇಶದ ಉಪಹಾರ ಪದಾರ್ಥವಾಗಿ ಪರಿಣಮಿಸಿದಂತೆ.

ಇನ್ನು ವಸ್ತ್ರ ಒಡವೆಗಳಲ್ಲಿ ನಾಗರಿಕರ ಆಕಾರ ಅಲಂಕಾರ ಬೇರೆಯಿದ್ದಂತೆ. ಬುಡಕಟ್ಟು ಜನರಲ್ಲಿ ಗುಡ್ಡಗಾಡು ಜನರಲ್ಲಿ ಭಿನ್ನತೆಯನ್ನು ಕಾಣುತ್ತೇವೆ. ಉದಾಹರಣೆಗೆ 'ಲಂಬಾಣಿ'ಗಳ ವೇಷಭೂಷಣ ವಸ್ತ್ರ ಒಡವೆಯನ್ನು ಉದಾಹರಿಸಬಹುದು. ಇಂದು ನಾಗರಿಕತೆಯ ಸೆಳವಿಗೆ ಬಂದರೂ ಕೂಡ, ಮೂಲತಃ ಅವರು ಬುಡಕಟ್ಟು ಜನಾಂಗಕ್ಕೆ ಸೇರಿದವರೇ.

ಈ ಬರೆಹದಲ್ಲಿ– ಉಳಿದ ವಸ್ತ್ರ ಒಡವೆಗಳಿಗೆ

ಒತ್ತು ಕೊಡದೆ 'ನತ್ತ'ನ್ನೇ ಮುಖ್ಯ ವಿಷಯವಾಗಿ ವಿವರಿಸುತ್ತೇನೆ. ಬಹುಶಃ ಇದಕ್ಕಿರುವಷ್ಟು ವೈವಿಧ್ಯವನ್ನು ನಾನು ಬೇರೆ ಯಾವುದರಲ್ಲೂ ಕಂಡಿಲ್ಲ. ಬರೀ ಅಲಂಕಾರ, ರೂಪದಲ್ಲಿಯ ವೈವಿಧ್ಯಕ್ಕಿಂತಲೂ ಇದಕ್ಕೆ ಧಾರ್ಮಿಕ ಹಿನ್ನೆಲೆಯೂ ಅಷ್ಟೇ ಮಹತ್ವದ್ದು. ಇದನ್ನು ಧರಿಸುವಲ್ಲಿ, ಸೌಭಾಗ್ಯದ -ಮಾಂಗಲ್ಯದ ಕುರುಹೂ ಅಡಕವಾಗಿದೆ. ಉತ್ತರ ಭಾರತದಲ್ಲಿ ಯುವತಿಯನ್ನು ನೀನು ಸೌಭಾಗ್ಯವತಿಯಾಗಿರು ಎಂದು ಹರಸುವಲ್ಲಿ ಮದುಮಗಳಿಗೆ ನಿನ್ನ






ಉತ್ತರ ಕರ್ನಾಟಕದಲ್ಲಿ ಈ ಮೂಗುತಿಗೆ "ನತ್ತು" ಎಂದು ಕರೆಯುತ್ತಾರೆ. ಅದಕ್ಕೊಂದು ವೈಶಿಷ್ಟ್ಯಮಯವಾದ ಆಕಾರವೂ ಉಂಟು. ಗ್ರಾಮೀಣ ಮಹಿಳೆ ಆ ನತ್ತನ್ನು ಧರಿಸುವಲ್ಲೇ ಅಭಿಮಾನ ಪಡುತ್ತಾಳೆ, ಇನ್ನು ಸುಸಂಸ್ಕೃತ ಮಹಿಳೆಯೆಂಬುವವಳು ಧರಿಸುವ ಮೂಗುಬೊಟ್ಟು ವಿವಿಧ ಆಕಾರ, ವಿವಿಧ ವಸ್ತು ಅಂದರೆ ಚಿನ್ನ, ಮುತ್ತು, ಹರಳು – ಹರಳು ವಿವಿಧ ವರ್ಣದಲ್ಲೂ ಇರಬಹುದು. ಆಕಾರ ಮತ್ತು ಅಳತೆಯಲ್ಲೂ ವೈವಿಧ್ಯವಾಗಿರಬಹುದು !

ಮಹಾರಾಷ್ಟ್ರ ಹಾಗೂ ಉತ್ತರ ಕರ್ನಾಟಕದಲ್ಲಿ ಈ ನತ್ತಿನ ಆಕಾರದ ವೈಶಿಷ್ಟ್ಯವೇ ಬೇರೆ. ಇದನ್ನು "ಗಾಡೆ" ಎಂದು ಕರೆಯುತ್ತಾರೆ. ಹೆಚ್ಚಾಗಿ ಬ್ರಾಹ್ಮಣರು ಹಾಗೂ ಕೆಲ ಶ್ರೀಮಂತ ವರ್ಗದವರು ಇದನ್ನು ಮುಂಜಿವೆ, ಮದುವೆ ಹಾಗೂ ಪೂಜೆ ಪುನಸ್ಕಾರಗಳಂತಹ ಮಹತ್ತ್ವದ ದಿನಗಳಲ್ಲಿ ಮಾತ್ರ ಧರಿಸುತ್ತಾರೆ.
ಅದನ್ನು ನಿರ್ಮಿಸುವಲ್ಲಿ ಭಾರಿ ಮೊತ್ತದ ಮುತ್ತು, ಹರಳು, ವಜ್ರ , ಹಾಗೂ ಹವಳಗಳನ್ನು ಆರಿಸುವದುಂಟು, ಇದನ್ನು ಧರಿಸುವಾಗಿನ ಇನ್ನೊಂದು ವೈಶಿಷ್ಟ್ಯವೆಂದರೆ, ಧರಿಸುವ ಸುಹಾಸಿನಿ ಕಚ್ಚೆ ಸೀರೆಯನ್ನು ಧರಿಸುವದು ಸಾಮಾನ್ಯ. ಈ 'ಗಾಡೆ'ದ ಬಳಕೆ ಕುಗ್ಗುತ್ತಲಿದೆ.

ಮೂಗುತಿ ಕೊನೆವರೆಗೂ "ಭದ್ರವಾಗಿರಲಿ" ಎಂದು ಹರಸುತ್ತಾರೆ. ಒಂದು ವೇಳೆ ದುರ್ದೈವದಿಂದ ವೈಧವ್ಯ ಕಂಡಳೋ ಮೂಗುತಿ ಮೂಗಿನಿಂದ ಇಳಿಯುತ್ತದೆ. ನಮ್ಮಲ್ಲಿ ಮಾಂಗಲ್ಯಕ್ಕೆ ಇದ್ದ ಪ್ರಾಧಾನ್ಯವೇ ಅಲ್ಲಿ ಈ ಮೂಗುತಿಗೆ. ಕೆಲವೆಡೆ ಈ ಭಾಗ್ಯ ಕೈಕಡಗಕ್ಕೆ - ಅದೇ ಮಾಂಗಲ್ಯದ ಪ್ರತೀಕ.



ತಮಿಳುನಾಡಿನ ಪ್ರಭಾವ ಕಂಡು ಬರುತ್ತದೆ. ಹೆಚ್ಚಾಗಿ ವಜ್ರದ ಮೂಗುತಿಯೇ ಇಲ್ಲಿಯ ಮಹಿಳೆಯರಿಗೆ ಇಷ್ಟ. ಮೂಗಿನ ಎರಡು ಬದಿಯನ್ನು ಈ ಮೂಗುತಿ ಅಲಂಕರಿಸಿರುತ್ತದೆ. ಆಕಾರದಲ್ಲೂ ದೊಡ್ಡದಾಗಿರುತ್ತದೆ.

ನಮ್ಮ ನಾಡಿನಲ್ಲಿ ಈ ಒಡವೆಗೆ ವೈವಿಧ್ಯ ಕಡಿಮೆಯೇ ಅನ್ನಬೇಕು. ಆದರೆ ಹೊರನಾಡುಗಳಲ್ಲಿ ಅದರಲ್ಲೂ ಉತ್ತರ ಭಾರತದಲ್ಲಂತೂ ಈ ಒಡವೆಯ ವೈವಿಧ್ಯವೂ ಬಹಳ, ಗಾತ್ರಗಳಲ್ಲೂ ಆಕೃತಿಗಳಲ್ಲೂ ಹೇಳತೀರದಷ್ಟು ವೈವಿಧ್ಯಮಯ, ಒಂದು (ಮುಖ) ಶಿರದಷ್ಟು ಆಕೃತಿಯ ನತ್ತೂ ಇರುತ್ತದೆ ಎಂದರೆ ನಿಮಗೆ ಅಚ್ಚರಿ ಆದೀತಲ್ಲವೇ ?

ಉತ್ತರ ಕರ್ನಾಟಕ ಕೆಲಕಾಲ ಪುಣೆಯ ಪೇಶ್ವೆಯವರ ಆಳ್ವಿಕೆಯಲ್ಲಿದ್ದಾಗ ಅವರ ಸಂಸ್ಕೃತಿ, ಭಾಷೆ , ವೇಷಭೂಷಣಗಳ ಪ್ರಭಾವದಂತೆಯೇ ಈ 'ಗಾಡೆ'ಯ ವಾಡಿಕೆಯೂ ಆಗಿರಬೇಕು. ಅಷ್ಟೇಕೆ ಮುಕ್ಕಾಲು ಶತಮಾನದ ಹಿಂದಿನಷ್ಟು ಕಾಲದಲ್ಲೂ ಇಲ್ಲಿಯ ಜನ ತಮ್ಮ 'ರುಜುವಾತ'ನ್ನು ಮರಾಠಿ (ಮೋಡಿ)ಯಲ್ಲಿಯೇ ಮಾಡುತಿದ್ದ ನಿದರ್ಶನಗಳಿವೆ. ಚಿಕ್ಕ ಗಾತ್ರದ ನತ್ತಿಗೆ ''ಮೂಗುಬೊಟ್ಟು'' ಎಂದು ಕರೆದರೆ ದೊಡ್ಡ ಆಕೃತಿಯಲ್ಲಿದ್ದುದೇ ''ಗಾಡೆ''.

ಇನ್ನು ಮೈಸೂರು ಕಡೆ ಹೊರಳಿದರೆ, ಅಲ್ಲಿ



ಚಿತ್ರಗಳನ್ನು ಸೂಕ್ಷ್ಮವಾಗಿ ವೀಕ್ಷಿಸಿದರೆ ನಿಮಗೇ ಆ ಮಾತು ಖಾತ್ರಿ ಆದೀತು. ಗಾತ್ರ ದೊಡ್ಡದಾದಷ್ಟು ನತ್ತಿನ ವಜನ ಹೆಚ್ಚಾಗುವದೂ ಸಹಜ, ಅದು ಮೂಗಿನ ರಂಧ್ರದಲ್ಲಿ ತೂಗಾಡುವದು ಕಷ್ಟ. ಅಂಥ ಪ್ರಸಂಗದಲ್ಲಿ ಬೇರೆ ಸರಪಳಿಗಳಿಂದ ಅದನ್ನು ಹೆಚ್ಚಾಗಿ ಕೂದಲಿನ ಆಧಾರಕ್ಕೆ ತೂಗುಹಾಕುವದು ಅನಿವಾರ್ಯವಾಗಿರುತ್ತದೆ.

ಮುಸ್ಲಿಮ್ ಬಾಂಧವರು ಕೂಡ ನತ್ತನ್ನು ಉಪಯೋಗಿಸುತ್ತಾರೆ. ಆದರೆ ತೊಡುವ ರೀತಿಯಲ್ಲಿ ವ್ಯತ್ಯಾಸವಿದೆ. ಮೂಗಿನ ಬಾಜುಕ್ಕೆ ಅದಕ್ಕಾಗಿ ರಂಧ್ರವಿರುವದಿಲ್ಲ, ಎರಡು ಹೊರಳಿಗಳ ನಡುವೆ ಅದು ಜೋತಾಡುತ್ತಿರುತ್ತದೆ. ಬಹುಶಃ ಅದಕ್ಕೆ 'ಬುಲಾಕ್' ಎಂದು ಕರೆಯುತ್ತಾರೆಂಬ ಸಂದೇಹ ನನಗಿದೆ. ಹಿಂದೆ ನಮ್ಮ ನಿಟ್ಟಿನಲ್ಲಿ ಮುಸ್ಲಿಮ್ ರಾಜರ ಪ್ರಭಾವ ಹೆಚ್ಚಾಗಿದ್ದಾಗ ಕೆಲ ಹಿಂದು ಕುಟುಂಬದ ಯೌವ್ವನೆಯರೂ ಕೂಡ ಈ ಬುಲಾಕ್‌ನ್ನು ಧರಿಸುತ್ತಿದ್ದರೆಂದು ನನ್ನ ಬಾಲ್ಯದ ನೆನಪುಗಳು ಹೇಳುತ್ತವೆ, ಅದಕ್ಕೆ ನಿದರ್ಶನವೆಂದರೆ ನನ್ನ ಸೋದರತ್ತೆಯರು ಮದುವೆ ಮೊದಲು ಧರಿಸಿದ ಜ್ಞಾಪಕ ಮಂಜು ಮಂಜಾಗಿ ಉಳಿದಿದೆ.




ಭಾರತದ ಇನ್ನು ಕೆಲ ಮೂಲೆಗಳನ್ನು ತಿರುಗಿದರೆ ಅದು ಕೂಡ ಉತ್ತರ ಭಾರತದ ನಿಟ್ಟಿನಲ್ಲಿ ಅಡ್ಡಾಡಿದರೆ ಇನ್ನೂ ಹೆಚ್ಚಿನ ನತ್ತುಗಳ ಸ್ವರೂಪ ಕಂಡಾವು ಎಂಬುದಕ್ಕೆ ಸಂದೇಹವೇ ಕಾಣದು. ●